

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 30-03-2021 ಪ್ರಶ್ನೆ ಸಂಖ್ಯೆ : 2085(2435)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಎ. ತಿಪ್ಪೇಸ್ವಾಮಿ(ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 30-03-2021

ಉತ್ತರಿಸುವ ಸಚಿವರು: ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು

ವಿಷಯ : ಕಲ್ಲು ಗಣಿಗಾರಿಕೆಯಲ್ಲಿ ಸ್ಫೋಟಕ ವಸ್ತುಗಳಿಂದ ಸಂಭವಿಸಿದ ಸಾವು-ನೋವುಗಳ ಬಗ್ಗೆ

(ಅ) ರಾಜ್ಯದಲ್ಲಿ ಇತ್ತೀಚೆಗೆ ನಡೆದ ಗಣಿಗಾರಿಕೆ ಮತ್ತು ಕಲ್ಲುಗಾಣಿಕೆಯಲ್ಲಿ ಅಕ್ರಮವಾಗಿ ಬಳಸುತ್ತಿರುವ ಸ್ಫೋಟಕ ವಸ್ತುಗಳಿಂದ ಹಲವಾರು ಸಾವು-ನೋವು ಸಂಭವಿಸಿರುವುದು ನಿಜವೇ;

(ಆ) ಹಾಗಿದ್ದಲ್ಲಿ, ಪೂರ್ಣ ವಿವರ ನೀಡುವುದು;

(ಇ) ಈ ಗಣಿಗಾರಿಕೆ ಮತ್ತು ಕಲ್ಲುಗಾಣಿಕೆಯನ್ನು ಅಕ್ರಮವಾಗಿ ನಡೆಸುವುದಲ್ಲದೇ, ವೈಜ್ಞಾನಿಕವಾಗಿ ಮತ್ತು ಸುರಕ್ಷಿತವಾಗಿ ಸ್ಫೋಟಕಗಳನ್ನು ಬಳಸದೇ, ಅನುಭವ-ನುರಿತ-ಅರಿತ ಫೋರ್‌ಮನ್‌ಗಳ ಮತ್ತು ಗಣಿಗಾರರು ಇಲ್ಲದ ಕಾರಣಕ್ಕಾಗಿ ಇಂತಹ ಅಪಘಾತಗಳಿಗೆ ಕಾರಣ ಎನ್ನುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಂಡ ಕ್ರಮಗಳಾವುವು; (ವಿವರ ನೀಡುವುದು)

(ಈ) ರಾಜ್ಯದಲ್ಲಿ ಗಣಿಗಾರಿಕೆ ಮತ್ತು ಕಲ್ಲುಗಾಣಿಕೆ ಹಾಗೂ ಇವುಗಳಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ವೈಜ್ಞಾನಿಕ ಮತ್ತು ಸುರಕ್ಷಿತ ರೀತಿಯಾಗಿ ನಡೆಸಲು ಈ ವಲಯದಲ್ಲಿ ಕಾರ್ಯಮಗ್ನರಾಗಿರುವ ಎಲ್ಲರಿಗೂ ಸೇರಿದಂತೆ ರಾಜ್ಯದಲ್ಲಿ ಒಂದು Mining Schoolನ್ನು ಕೇಂದ್ರ ಸರ್ಕಾರದ ಗಣಿ ಮಂತ್ರಾಲಯದ ಆಶ್ರಯದೊಂದಿಗೆ ಸ್ಥಾಪಿಸಲು ಉದ್ದೇಶಿಸಲಾಗಿದೆಯೇ; ಹಾಗಿದ್ದಲ್ಲಿ, ವಿವರ ನೀಡುವುದು?